

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 10-03-2021 ಪ್ರಶ್ನೆ ಸಂಖ್ಯೆ : 148 (1035)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಗೋವಿಂದ ರಾಜು (ವಿಧಾನಸಭೆಯಿಂದ ಚುನಾಯಿತರಾದವರು )

ಉತ್ತರ ನೀಡಬೇಕಾದ ದಿನಾಂಕ : 10-03-2021

ಉತ್ತರಿಸುವ ಸಚಿವರು: ಪಶುಸಂಗೋಪನೆ ಸಚಿವರು

ವಿಷಯ : ಹಾಲಿನ ಬೆಲೆ ಹೆಚ್ಚಿಸುವ ಬಗ್ಗೆ

(ಅ) ಹಾಲು ಉತ್ಪಾದಿಸುವ ರೈತರಿಗೆ ಹಾಲಿಗೆ ಸರಿಯಾದ ಬೆಲೆ ಸಿಗದಿರುವುದು ಹಾಗೂ ಉತ್ಪಾದನಾ ವೆಚ್ಚ ಹೆಚ್ಚಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಗೋಹತ್ಯೆ ನಿಷೇದ ಕಾಯ್ದೆ ಜಾರಿಯಾದ ನಂತರ ತಮ್ಮ ಹಸುಗಳಿಗೆ ಸರಿಯಾದ ಬೆಲೆ ಸಿಗದೇ ರೈತರು ಆತಂಕಕಾರಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) ಕೆಲವೊಂದು ರಾಜ್ಯಗಳಲ್ಲಿ ಹಾಲಿಗೆ ಉತ್ತಮ ಬೆಲೆ ಕೊಡುತ್ತಿರುವಂತೆ ಕರ್ನಾಟಕ ರಾಜ್ಯದಲ್ಲಿ ಸಹ ಹಾಲಿನ ಬೆಲೆಯನ್ನು ಹೆಚ್ಚಿಸಬಹುದಲ್ಲವೇ;

(ಈ) ನಿರುಪಯುಕ್ತ ಹಸುಗಳಾದಾಗ ಅಂತಹ ಹಸುಗಳಿಗೆ ಸರ್ಕಾರ ಆರ್ಥಿಕ ಪರಿಹಾರ ನೀಡಬಹುದಲ್ಲವೇ;

(ಉ) ಪಶು ಆಹಾರವನ್ನು ಇಂತಹ ಹಾಲು ಉತ್ಪಾದಕ ರೈತರಿಗೆ ಸಬ್ಸಿಡಿ ದರದಲ್ಲಿ ಕೊಡಬಹುದಲ್ಲವೇ;

(ಊ) ಗೋಹತ್ಯೆ ನಿಷೇದ ಕಾಯ್ದೆ ಜಾರಿಯಾದ ನಂತರ ಈಗಿರುವ ಪಶು ವೈದ್ಯಾಧಿಕಾರಿಗಳೇ ಎಲ್ಲಾ ಕೆಲಸವನ್ನು ನಿಭಾಯಿಸಬಹುದು ಎಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ?